ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ

# ವಾರ್ತಾಪತ್ರ

(ತ್ರೈಮಾಸಿಕ ಪತ್ರಿಕೆ)




ಸಂಪುಟ: ೦೮ ೧೧ ೨೨ (ಖಾಸಗಿ ಪ್ರಸಾರಕ್ಕಾಗಿ ಮಾತ್ರ) ಜನವರಿ–ಮಾರ್ಚ್ ೨೦೧೨

ಸಂಚಿಕೆ: ೨೨

ಸಂಪಾದಕರು
ಎಸ್.ವಿ. ಶ್ರೀನಿವಾಸರಾವ್



**ಪರಿವಿಡಿ**



ವಿಳಾಸ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೪೭೭,೨೬೬೭೬೭೭೩
ಇಮೇಲ್ :
bmsritrust@gmail.com
ಶಾಖೆ
ಬಿ.ಎಂ.ಶ್ರೀ. ಶತಮಾನೋತ್ಸವ ಭವನ
ಬೆಳ್ಳೂರು, ನಾಗಮಂಗಲ ತಾ||,ಮಂಡ್ಯ ಜಿಲ್ಲೆ.

## ೩–೧–೧೨ 'ಶ್ರೀ ಉತ್ಸವ' ಬಿ.ಎಂ.ಶ್ರೀ ಜನ್ಮದಿನದ ಕಾರ್ಯಕ್ರಮಗಳು



'ಶ್ರೀ ಉತ್ಸವ', ಬಿ.ಎಂ.ಶ್ರೀ. ಪ್ರತಿಮೆಗೆ ಮಾಲಾರ್ಪಣೆ (ನ್ಯಾಷನಲ್ ಕಾಲೇಜು ವೃತ್ತ). ಮಾನ್ಯಶ್ರೀ ಹೇಮಚಂದ್ರಸಾಗರ್, ಶಾಸಕರು, ಶ್ರೀ ಬಿ. ಎಸ್. ಸತ್ಯನಾರಾಯಣ, ಶ್ರೀ ಅನಿಲ್‌ಕುಮಾರ್ ಬೆಂಗಳೂರು ಮಹಾನಗರ ಪಾಲಿಕೆ ಸದಸ್ಯರು. ಪ್ರತಿಷ್ಠಾನದ ಪದಾಧಿಕಾರಿಗಳು.

**ಕಾರ್ಯಕ್ರಮ ೧**

ಮಾನ್ಯ ಶ್ರೀ ಹೇಮಚಂದ್ರ ಸಾಗರ್, ಶಾಸಕರು ಬೆಳಿಗ್ಗೆ ೯–೩೦ಕ್ಕೆ ಬಸವನಗುಡಿ ನ್ಯಾಷನಲ್ ಕಾಲೇಜು ವೃತ್ತದಲ್ಲಿರುವ ಬಿ.ಎಂ.ಶ್ರೀ. ಪ್ರತಿಮೆಗೆ ಮಾಲಾರ್ಪಣೆ ಮಾಡಿದರು. ಬಿ.ಬಿ.ಎಂ.ಪಿ.ಯ ಸದಸ್ಯರುಗಳಾದ ಶ್ರೀ ಎಸ್. ಅನಿಲ್‌ಕುಮಾರ್ ಮತ್ತು ಶ್ರೀ ಕಟ್ಟೆ ಸತ್ಯನಾರಾಯಣ ಅವರು ಉಪಸ್ಥಿತರಿದ್ದರು. ಪ್ರೊ. ಡಿ. ಲಿಂಗಯ್ಯ (ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರು) ಅಧ್ಯಕ್ಷತೆ ವಹಿಸಿದ್ದರು. ಕಾರ್ಯಕ್ರಮದ ಪ್ರಾರಂಭದಲ್ಲಿ ವಿದುಷಿ ಸುಕನ್ಯ ವಿಜಯಕುಮಾರ್ ಬಿ.ಎಂ.ಶ್ರೀ. ಗೀತೆಗಳನ್ನು ಪ್ರಸ್ತುತಪಡಿಸಿದರು. ವ್ಯವಸ್ಥಾಪಕ ಕಾರ್ಯದರ್ಶಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅತಿಥಿಗಳ ಪರಿಚಯ ಮಾಡಿಸಿ, ಸರ್ವರನ್ನೂ ಸ್ವಾಗತಿಸಿ, ಶಾಸಕ ಶ್ರೀ ರವಿಸುಬ್ರಹ್ಮಣ್ಯ ಅವರ ಕೊಡುಗೆ ೧೦ ಲಕ್ಷ ರೂಪಾಯಿಗಳಿಂದ ನವೀಕರಣಗೊಂಡಿರುವ ಪ್ರತಿಷ್ಠಾನದ ಸಭಾಂಗಣಕ್ಕೆ ಏರ್‌ಕಂಡೀಷನರ್ಸ್ ಅಳವಡಿಸುವ ಹಾಗೂ ಜನರೇಟರ್‌ನ ಅಗತ್ಯವನ್ನು ವಿವರಿಸಿ, ಇವುಗಳನ್ನು ಶಾಸಕರು ಶ್ರೀ ಹೇಮಚಂದ್ರ ಸಾಗರ್ ತಮ್ಮ ಶಾಸಕರ ನಿಧಿಯಿಂದ ಕೊಡಮಾಡಬೇಕೆಂದು ವಿನಂತಿಸಿಕೊಂಡರು. ಇದನ್ನು ಆಗುಮಾಡಲು ಬಿ.ಬಿ.ಎಂ.ಪಿ. ಸದಸ್ಯರುಗಳು ಸಹಕರಿಸಬೇಕೆಂದೂ ವಿನಂತಿಸಿಕೊಂಡರು. ಶಾಸಕರು ಈ ಬಗ್ಗೆ ಸಹಾಯಮಾಡುವ ಆಶ್ವಾಸನೆ ನೀಡಿದರು. ಕೊನೆಯಲ್ಲಿ ಡಾ. ನಾ. ಗೀತಾಚಾರ್ಯ ವಂದಿಸಿದರು.

# ಸಂಪಾದಕೀಯ

ಕನ್ನಡದ ಕಣ್ವ, ಕನ್ನಡ ನವೋದಯದ ಕಾವ್ಯದ ಹರಿಕಾರ, ಆಚಾರ್ಯ ಬಿ.ಎಂ.ಶ್ರೀ. ಅವರು ಕನ್ನಡ ಭಾಷೆಯ ಅಳಿವು-ಉಳಿವು ಬಗ್ಗೆ ೧೯೧೧ ರಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘದ ವಾರ್ಷಿಕ ಸಭೆಯಲ್ಲಿ ಮುಖ್ಯ ಅತಿಥಿಯಾಗಿ 'ಕನ್ನಡ ಮಾತು ತಲೆಯೆತ್ತುವ ಬಗೆ' ಎಂಬ ವೈಚಾರಿಕವಾದ ಉಪನ್ಯಾಸ ನೀಡಿದರು. ಈ ಉಪನ್ಯಾಸಕ್ಕೆ ೧೦೦ ವರ್ಷಗಳು ಕಳೆದಿದ್ದರೂ ಅವರು ಹೇಳಿರುವ ಮೌಲಿಕ ವಿಷಯಗಳು ಇಂದೂ ಪ್ರಸ್ತುತವೆನಿಸಿದೆ.

**ಮುಖ್ಯವಾದವುಗಳು :**

೧. ಇಂಡಿಯಾದಲ್ಲಿ ವಿದ್ಯಾವಂತನೆನ್ನುವ ಪ್ರತಿಯೊಬ್ಬನೂ ಇಂಗ್ಲಿಷ್, ಸಂಸ್ಕೃತ, ತನ್ನ ಕಡೆಯ ದೇಶ, ಭಾಷೆ ಈ ಮೂರನ್ನೂ ಚೆನ್ನಾಗಿ ತಿಳಿದಿರಬೇಕು.

೨. ಮೂರನ್ನೂ ಕಲಿಸತಕ್ಕ ಭಾರ ಯೂನಿವರ್ಸಿಟಿಯ ಪಂಡಿತರ ಮೇಲೆ ಬಿದ್ದಿದೆ. ಉಳಿಸಿಕೊಂಡು, ತೇಜಸ್ಸನ್ನು ಹೊಂದಿಸುವ ಭಾರ ವಿದ್ಯಾವಂತರ ಮೇಲಿದೆ.

೩. ನಮ್ಮ ಭಾಷೆಯನ್ನು ನಾವು ಎತ್ತದೇ ಹೋದರೆ, ಎತ್ತುವವರು ಯಾರು? ಎತ್ತುವುದಕ್ಕೆ ನಿಂತರೆ ತಡೆಯುವವರು ಯಾರು ?

೪. ನಮ್ಮ ಕನ್ನಡವನ್ನು ಮುಂದಕ್ಕೆ ತರುವುದಕ್ಕೆ ಬೇಕಾದ ಹೆಮ್ಮೆಯೂ, ಹೆಬ್ಬುಬ್ಬೂ ನಮ್ಮಲ್ಲಿ ಉಂಟು.

೫. ಇಂಗ್ಲೀಷ್ ಸಾಹಿತ್ಯವೇ ಜೀರ್ಣವಾದ ನಮ್ಮ ಕಾವ್ಯಮಾಲೆಯನ್ನು ಕೈಕೊಟ್ಟು ಎತ್ತಬೇಕು; ಇಂಗ್ಲೀಷ್ ಸಾಹಿತ್ಯವೇ ಸಂಸ್ಕೃತ ಸಾಹಿತ್ಯದಲ್ಲಿ ನಮ್ಮ ಕಾವ್ಯಮಾಲೆಗೆ ಇಳಿದಿರುವ ದೋಷಗಳನ್ನು ಪರಿಹಾರ ಮಾಡಬೇಕು.

೬. ದೇಶದಲ್ಲಿ ಹುಳುತಿಂದು ಹೋಗದೆ ಉಳಿದಿರುವ ಗ್ರಂಥಗಳನ್ನೆಲ್ಲ ಶೇಖರಿಸಿ ಒಂದನ್ನೂ ಬಿಡದಂತೆ ಅಚ್ಚುಹಾಕುವುದು.

೭. ಈ ಲಕ್ಷ್ಯ ಗ್ರಂಥಗಳೆಲ್ಲಾ ಅಚ್ಚಾದ ಮೇಲೆ ಎಲ್ಲವನ್ನೂ ಕೊನೆಮುಟ್ಟ ಶೋಧಿಸಿ ಹೊಸದಾಗಿ ಲಕ್ಷಣ ಗ್ರಂಥಗಳನ್ನು ಕಾಲಕ್ಕೆ ತಕ್ಕಂತೆ ರಚಿಸುವುದು.

೮. ಭಾಷೆಯ ವಿಚಾರದಲ್ಲಿ ಹೊಸಗನ್ನಡವನ್ನೇ ಬರೆಯಬೇಕು. ಹಳಗನ್ನಡದಲ್ಲಿ ನನಗೂ ಅಕ್ಕರೆಉಂಟು.

೯. ಗ್ರಂಥ ವಿಷಯ ಪ್ರಯೋಜನವಾದ ಅಂಶವಾಗಿರಬೇಕು. ಸಮಾಜದ ಏಳಿಗೆಗೆ ನೆರವಾಗುವಂತೆ ಇರಬೇಕು.

೧೦. ಆರ್ಯರೇ, ಬಿದ್ದುಹೋಗಿರುವ ನಮ್ಮ ಮಾತೃಭಾಷೆಯನ್ನು ತಲೆಯೆತ್ತಿಸುವುದು ಸುಲಭವಾದ ಕೆಲಸವಲ್ಲ. ಅಲ್ಲೊಬ್ಬರು, ಇಲ್ಲೊಬ್ಬರು ವಿರಾಮ ಪಂಕ್ತಿಯನ್ನು ಗೀಚಿ ಅಚ್ಚಿಗೆ ತರುವುದರಿಂದ ಸಾಗತಕ್ಕ ಕೆಲಸವೂ ಅಲ್ಲ.... ಈಗ ಎಲ್ಲಾ ರಾಜ್ಯಗಳಲ್ಲೂ ಎಲ್ಲಾ ಜನರಿಗೂ ಓದು-ಬರಹವನ್ನು ಕಲಿಸಿ ತಿಳಿವಳಿಕೆಗೆ ದಾರಿಮಾಡಬೇಕೆಂದು ಹೊರಟಿದ್ದಾರೆ. ಇದಕ್ಕೆ ಮಾತೃಭಾಷೆಯನ್ನು ಬಿಟ್ಟರೆ ಆಗುವುದಿಲ್ಲ...

ಬಿ.ಎಂ.ಶ್ರೀ. ಅವರ ಮೇಲ್ಕಂಡ ಅನಿಸಿಕೆಗಳನ್ನು ಜನರಲ್ಲಿ ಜೀವಂತ ಉಳಿಸಿ, ಕನ್ನಡದ ಸರ್ವತೋಮುಖ ಪ್ರಗತಿಗೆ ಜನರಲ್ಲಿ ಜಾಗೃತಿಯನ್ನುಂಟು ಮಾಡುವ ಆಶಯದಿಂದ 'ಕನ್ನಡ ಮಾತು ತಲೆಯೆತ್ತುವ ಬಗೆ' ಜಾಗೃತ ವರ್ಷವನ್ನು ವರ್ಷಾದ್ಯಂತಾ, ಕನ್ನಡ ರಾಜ್ಯಾದ್ಯಂತಾ ನಡೆಸಲು ಯೋಚಿಸಿದ್ದೇವೆ. ಕನ್ನಡ ವಿಶ್ವವಿದ್ಯಾನಿಲಯಗಳು, ಸಂಘ ಸಂಸ್ಥೆಗಳು ಈ ಕಾರ್ಯಕ್ರಮ ನಡೆಸಲು ಮುಂದಾಗಬೇಕೆಂದು ವಿನಂತಿಸಿಕೊಳ್ಳುತ್ತಿದ್ದೇವೆ. ಈ ಬಗ್ಗೆ ಉಪನ್ಯಾಸಕರುಗಳನ್ನು ಕರೆತರಲು ಬಿ.ಎಂ.ಶ್ರೀ. ಪ್ರತಿಷ್ಠಾನ ಸಿದ್ಧವಿರುತ್ತದೆ. ತಾವು ಸ್ಥಳೀಯ ಸೌಕರ್ಯಗಳನ್ನು ಒದಗಿಸಿ ಕಾರ್ಯಕ್ರಮ ಆಯೋಜಿಸಿದರೆ ಸಾಕು ಈ ಅಭಿಯಾನ ಸಾರ್ಥಕವಾಗುತ್ತದೆ. ಜನರಲ್ಲಿ ಜಾಗೃತಿ ಮೂಡಿಸಿದಂತಾಗುತ್ತದೆ.

**–ಎಸ್. ವಿ. ಶ್ರೀನಿವಾಸರಾವ್**
ಸಂಪಾದಕರು

# ಪ್ರತಿಷ್ಠಾನದ ವಾರ್ತೆ

**ದಿನಾಂಕ : ೩-೧-೨೦೧೨**

**ಕಾರ್ಯಕ್ರಮ-೨**

ಬೆಳಿಗ್ಗೆ ೧೦ ಗಂಟೆಗೆ ಪ್ರತಿಷ್ಠಾನದಲ್ಲಿರುವ ಬಿ.ಎಂ.ಶ್ರೀ ಪ್ರತಿಮೆಗೆ. ಬಿ.ಎಂ.ಶ್ರೀ. ಅವರ ತಂಗಿಯ ಮಗ ಶ್ರೀ ಎನ್. ಎಸ್. ಕೃಷ್ಣಸ್ವಾಮಿ ಅವರಿಂದ ಮಾಲಾರ್ಪಣೆ ನಡೆಯಿತು. ಬಸವನಗುಡಿ ಶಾಸಕರಾದ ಶ್ರೀ ರವಿಸುಬ್ರಹ್ಮಣ್ಯ ಅವರು ಶಾಸಕ ನಿಧಿಯಿಂದ ನವೀಕೃತಗೊಂಡಿರುವ ಸಭಾಂಗಣವನ್ನು ವಿದ್ಯುಕ್ತವಾಗಿ ಉದ್ಘಾಟಿಸಿದರು. ಬಿ.ಎಂ.ಶ್ರೀ ಗೀತ ಗಾಯನ ಸ್ಪರ್ಧೆ ಸಹ ನಡೆಯಿತು. ಸುಮಾರು ೧೫ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಈ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಬಿ.ಬಿ.ಎಂ.ಪಿ. ಸದಸ್ಯರಾದ ಶ್ರೀ ಕಟ್ಟೆ ಸತ್ಯನಾರಾಯಣ ಅವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಪ್ರೊ. ಡಿ. ಲಿಂಗಯ್ಯ ಅಧ್ಯಕ್ಷತೆ ವಹಿಸಿದ್ದರು.

**ಕಾರ್ಯಕ್ರಮ-೩**

ಸಂಜೆ ೪-೦೦ ಗಂಟೆಯಿಂದ ನಡೆದ ಕಾರ್ಯಕ್ರಮದಲ್ಲಿ 'ಕನ್ನಡ ಮಾತು ತಲೆ ಎತ್ತುವ ಬಗೆ' ಜಾಗೃತಿ ವರ್ಷದ ಉದ್ಘಾಟನೆಯನ್ನು ಖ್ಯಾತ ಸಾಹಿತಿ, ವಿಮರ್ಶಕ ಪ್ರೊ. ಎಲ್. ಎಸ್. ಶೇಷಗಿರಿರಾವ್ ನೆರವೇರಿಸಿ ಬಿ.ಎಂ.ಶ್ರೀ ಅವರ ಐತಿಹಾಸಿಕ ಭಾಷಣದ ಬಗ್ಗೆ ಮಾತನಾಡಿದರು. ಗೀತಗಾಯನ ಸ್ಪರ್ಧೆಯಲ್ಲಿ ಜಯಗಳಿಸಿದ ಸ್ಪರ್ಧಾಳುಗಳಿಗೆ ಶ್ರೀ ರವಿಸುಬ್ರಹ್ಮಣ್ಯ ಮತ್ತು ಗೌ॥ ಅಧ್ಯಕ್ಷರಾದ ಪ್ರೊ. ಎಂ. ಎಚ್. ಕೃಷ್ಣಯ್ಯ ಅವರು ಬಹುಮಾನ ವಿತರಿಸಿದರು.

ಅಜಂತಾ ಸಾಂಸ್ಕೃತಿಕ ಸಂಸ್ಥೆಯ ವಿದ್ಯಾರ್ಥಿಗಳಿಂದ ಬಿ.ಎಂ.ಶ್ರೀ. ಗೀತೆಗಳ ನೃತ್ಯರೂಪಕ ನಡೆಯಿತು. ಸಭಿಕರನ್ನು



'ಶ್ರೀ ಉತ್ಸವ', ಬಿ.ಎಂ.ಶ್ರೀ. ಪ್ರತಿಮೆಗೆ ಮಾಲಾರ್ಪಣೆ, ಗೀತಗಾಯನ ಸ್ಪರ್ಧೆ. ತಾ॥ ೩-೧-೨೦೧೨ ಕನ್ನಡ ಮಾತು ತಲೆಯೆತ್ತುವ ಬಗೆ ಮತ್ತು ಇಂಗ್ಲೀಷ್ ಗೀತೆಗಳು, ಗ್ರಂಥಗಳ ಬಿಡುಗಡೆ, ಪ್ರೊ॥ ಎಲ್. ಎಸ್. ಶೇಷಗಿರಿರಾವ್ ಅವರಿಂದ, ಅಧ್ಯಕ್ಷತೆ : ಪ್ರೊ॥ ಎಂ. ಎಚ್. ಕೃಷ್ಣಯ್ಯ




೩-೧-೧೨ ಸನ್ಮಾನ್ಯಶ್ರೀ ರವಿ ಸುಬ್ರಹ್ಮಣ್ಯ ಶಾಸಕರು, ಬಸವನಗುಡಿ ಕ್ಷೇತ್ರ ಅವರು ನವೀಕೃತ ಸಭಾಂಗಣವನ್ನು ಉದ್ಘಾಟಿಸಿದರು.




೩-೧-೧೨ 'ಶ್ರೀ ಉತ್ಸವ' ನವೀನ ಸಭಾಂಗಣದ ಉದ್ಘಾಟನೆ ಶಾಸಕ ಶ್ರೀ ರವಿ ಸುಬ್ರಹ್ಮಣ್ಯ ಅವರಿಂದ



೩-೧-೧೨ 'ಶ್ರೀ ಉತ್ಸವ' ಅಜಂತಾ ಸಾಂಸ್ಕೃತಿಕ ಸಂಸ್ಥೆ ವಿದ್ಯಾರ್ಥಿಗಳಿಂದ ಬಿ.ಎಂ.ಶ್ರೀ. ಗೀತೆಗಳ ನೃತ್ಯ ರೂಪಕ.

ರಂಜಿಸಿತು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಪ್ರೊ. ಎಂ. ಎಚ್. ಕೃಷ್ಣಯ್ಯ ವಹಿಸಿದ್ದರು. ಪ್ರಾರಂಭದಲ್ಲಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರು ಅತಿಥಿಗಳ ಪರಿಚಯ ಮಾಡಿಸಿ ಸ್ವಾಗತಿಸಿದರು. ಕೊನೆಯಲ್ಲಿ ಕೋಶಾಧಿಕಾರಿಗಳಾದ ಶ್ರೀ ಎಂ. ಎಸ್. ರಾಮಪ್ರಸಾದ್ ಸಭೆಯನ್ನು ವಂದಿಸಿದರು.

**ದಿನಾಂಕ : ೩-೧-೨೦೧೨**

**ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಬೆಳ್ಳೂರು ಘಟಕ**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಬೆಳ್ಳೂರು; 'ಅನುಭವ ಮಂಟಪ' ಸಾಹಿತ್ಯ ಪರಿಷತ್ತು ಮಂಡ್ಯದ ಸಂಯೋಗದೊಡನೆ ಆಚಾರ್ಯ ಬಿ.ಎಂ.ಶ್ರೀ. ಅವರ ೧೨೮ನೇ ಜನ್ಮ ದಿನಾಚರಣೆಯನ್ನು ಬೆಳಗ್ಗೆ ೧೦.೩೦ ರಿಂದ ಅದ್ದೂರಿಯಾಗಿ ಬೆಳ್ಳೂರಿನ ಸ್ಮಾರಕ ಭವನದಲ್ಲಿ ಆಚರಿಸಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಮಂಡ್ಯ ಲೋಕ ಸಭಾ ಸದಸ್ಯ ಶ್ರೀ ಎನ್. ಚೆಲುವರಾಯಸ್ವಾಮಿ ಅವರು ವಹಿಸಿದ್ದರು. ಸಂಗೀತ ನೃತ್ಯ ಕಲಾ ಅಕಾಡೆಮಿಯ ಅಧ್ಯಕ್ಷರಾದ ಶ್ರೀಮತಿ ವೈಜಯಂತಿ ಕಾಶಿ ಕಾರ್ಯಕ್ರಮ ಉದ್ಘಾಟಿಸಿದರು. ವಿಧಾನ ಸಭಾ ಸದಸ್ಯ ಶ್ರೀ ಕೆ. ಸುರೇಶಗೌಡರು ಬಿ.ಎಂ.ಶ್ರೀ ಭಾವಚಿತ್ರ ಅನಾವರಣಗೊಳಿಸಿದರು. ಮುಖ್ಯ ಅತಿಥಿಗಳಾಗಿ ಮಾಜಿ ಸಚಿವ ಶ್ರೀ ಹೆಚ್. ಟಿ. ಕೃಷ್ಣಪ್ಪ, ಮಾಜಿ ವಿಧಾನಪರಿಷತ್ ಸದಸ್ಯ ಶ್ರೀ ಕೆ. ಟಿ. ಶ್ರೀ ಕಂಠೇಗೌಡರು, ವಿಶ್ರಾಂತ ಕುಲಪತಿ (ಕ.ರಾ.ಮು.ವಿ.ವಿ.) ಡಾ. ಎನ್. ಎಸ್. ರಾಮೇಗೌಡ ಆಗಮಿಸಿದ್ದರು. ಅನಂತರ ನಡೆದ ದತ್ತಿ ಕಾರ್ಯಕ್ರಮಗಳ ಅಧ್ಯಕ್ಷತೆಯನ್ನು ಕುವೆಂಪು ಭಾಷಾ ಭಾರತಿ ಅಧ್ಯಕ್ಷರಾದ ಡಾ. ಪ್ರಧಾನ ಗುರುದತ್ ವಹಿಸಿದ್ದರು. ಡಾ. ಬಿ.ಎಂ.ಶ್ರೀ. ಅವರ ಕೃತಿಗಳನ್ನು ಕುರಿತು ಡಾ. ಎಸ್. ಎಂ. ವೃಷಭೇಂದ್ರಸ್ವಾಮಿ ಡಾ. ಸುಮತೀಂದ್ರನಾಡಿಗ್ ಉಪನ್ಯಾಸ ನೀಡಿದರು. ೨ನೇ ಗೋಷ್ಠಿಯ ಅಧ್ಯಕ್ಷತೆಯನ್ನು ವಿಶ್ರಾಂತ ಕನ್ನಡ ಪ್ರಾಧ್ಯಾಪಕ ಪ್ರೊ. ಕೆ. ಭೈರವಮೂರ್ತಿ ವಹಿಸಿದ್ದರು.

ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಖ್ಯಾತ ಸಾಹಿತಿ ಶ್ರೀಮತಿ ಆರ್ಯಾಂಬ ಪಟ್ಟಾಭಿ ವಹಿಸಿದ್ದರು. ಪ್ರಸಿದ್ಧ ಗಾಯಕಿ ಶ್ರೀಮತಿ ಶಾಂತಾ ಜಗದೀಶ್ ಅವರಿಂದ ಬಿ.ಎಂ.ಶ್ರೀ ಗೀತೆಗಳ ಗಾಯನ ನಡೆಯಿತು. ವಿಶೇಷ ಆಹ್ವಾನಿತರುಗಳಾಗಿ ಶ್ರೀ ಮುತ್ತಣ್ಣ, ಮಹಮದ್ ಹುಸೇನ್, ಶ್ರೀ ಪದ್ಮನಾಭ, ಶ್ರೀ ಹೆಚ್. ಟಿ. ಕೃಷ್ಣೇಗೌಡ, ಶ್ರೀ ಟಿ. ಪಿ. ನಾಗರಾಜು, ಶ್ರೀ ಜೀರಳ್ಳಿ ರಮೇಶ್ ಆಗಮಿಸಿದ್ದರು.

**೧೩-೧-೨೦೧೨ ನಾರಾಯಣ ಶರ್ಮ ಸಂಸ್ಕೃತಿ ಕೇಂದ್ರ,** ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಸಹಕಾರದಿಂದ **'ನೇತ್ರದಾನಿ ಲಕ್ಷ್ಮೀದೇವಿ ನಾರಾಯಣ ಶರ್ಮ ಸ್ಮರಣೆ, ತಿರುಪ್ಪಾವೈ ಪ್ರವಚನ ಕಾರ್ಯಕ್ರಮ ಜರುಗಿತು.** ವಿದುಷಿ ಸುಕನ್ಯ ವಿಜಯಕುಮಾರ್ ತಿರುಪ್ಪಾವೈನ ಕೆಲವು ವಚನಗಳನ್ನು ಹಾಡಿದರು. ಡಾ. ನಾ. ಗೀತಾಚಾರ್ಯ ತಿರುಪ್ಪಾವೈಗೆ ವ್ಯಾಖ್ಯಾನ ಮಾಡಿದರು. ಪ್ರೊ. ಜಿ. ಅಶ್ವತ್ಥನಾರಾಯಣ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಪ್ರಾರಂಭದಲ್ಲಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಸರ್ವರನ್ನು ಸ್ವಾಗತಿಸಿದರು.

**೨೦-೧-೨೦೧೨ ಶುಕ್ರವಾರ ೫-೩೦ ಗಂಟೆಗೆ ಯಂ.ಕೆ.ವಿ. ವಿಜಯಲಕ್ಷ್ಮೀ, ಎ. ಸುಬ್ಬಯ್ಯ ಹೆಗಡೆ ಶಾಸ್ತ್ರಿ ಸ್ಮಾರಕ ದತ್ತಿ ಕಾರ್ಯಕ್ರಮಗಳು ಜರುಗಿದವು.** ನಿವೃತ್ತ ಕನ್ನಡ ಪ್ರಾಧ್ಯಾಪಕ ಪ್ರೊ. ಶಿವರಾಮಯ್ಯ **'ಮಹಾಕವಿ ಪಂಪನ ಪರಿಸರ ಪ್ರಜ್ಞೆ'** ಬಗ್ಗೆ ದತ್ತಿ ಉಪನ್ಯಾಸ ನೀಡಿದರು. ಡಾ. ಆರ್. ಲಕ್ಷ್ಮೀನಾರಾಯಣ, ನಿವೃತ್ತ ಕನ್ನಡ ಪ್ರಾಧ್ಯಾಪಕರು, ಅಧ್ಯಕ್ಷತೆ ವಹಿಸಿದ್ದರು. ಕಾರ್ಯಕ್ರಮದ ಪ್ರಾರಂಭದಲ್ಲಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರುಗಳ ಪರಿಚಯ ಮಾಡಿಸಿ, ಎಲ್ಲರನ್ನು ಸ್ವಾಗತಿಸಿದರು ಡಾ. ನಾ. ಗೀತಾಚಾರ್ಯ ಕಾರ್ಯಕ್ರಮ ನಿರೂಪಿಸಿ ಕೊನೆಯಲ್ಲಿ ವಂದನೆ ಸಲ್ಲಸಿದರು.

**೨೨-೧-೨೦೧೨ ಭಾನುವಾರ ಬೆಳಿಗ್ಗೆ ೧೦-೩೦ಕ್ಕೆ ಕಾಳಿಂಗರಾವ್ ಬಳಗ ದತ್ತಿ, ಎಂ.ವಿ.ಸೀ. ಕನ್ನಡ ದತ್ತಿ ಕಾರ್ಯಕ್ರಮಗಳ ಜೊತೆಗೆ ಅಖಿಲ ಕರ್ನಾಟಕ ಸುಗಮ ಸಂಗೀತ ಸ್ಪರ್ಧೆಯನ್ನು ಹಮ್ಮಿಕೊಳ್ಳಲಾಗಿತ್ತು.** ಇದರಲ್ಲಿ ಬಿ.ಎಂ.ಶ್ರೀ. ಸ್ಮಾರಕ ಭಾವಗೀತೆ, ಕಾಳಿಂಗರಾವ್ ಸ್ಮಾರಕ ಜನಪದಗೀತೆ, ಎಂ.ವಿ.ಸೀ ನುಡಿ-ನಾಡು ಗೀತೆಗಳ ಸ್ಪರ್ಧೆ ನಡೆಯಿತು. ಈ ಕಾರ್ಯಕ್ರಮಗಳ ಉದ್ಘಾಟನೆಯನ್ನು ಹೊಂಬಾಳೆ ಪ್ರತಿಭಾರಂಗದ ಶ್ರೀ ಫಲ್ಗುಣ ನಡೆಸಿದರು.

ಮುಖ್ಯ ಅತಿಥಿಗಳಾಗಿ ಶ್ರೀ ಪ್ರಸಾದ, ಶ್ರೀಮತಿ ಜಯ ಮಲ್ಲೇಶ, ಶ್ರೀಮತಿ ಜ್ಯೋತಿ ನಾಗರಾಜ್, ಶ್ರೀಮತಿ ಅರವಿಂದ ಆಗಮಿಸಿದ್ದರು. ಪ್ರತಿಷ್ಠಾನದ ಅಧ್ಯಕ್ಷರಾದ ಪ್ರೊ. ಡಿ. ಲಿಂಗಯ್ಯ ಅಧ್ಯಕ್ಷತೆ ವಹಿಸಿದ್ದರು. ಸಂಚಾಲಕರಾದ ಶ್ರೀ ಪಾರ್ಥಸಾರಥಿ ಮತ್ತು ಶ್ರೀಮತಿ ರಮಾದೇವಿ ವಿಶ್ವೇಶ್ವರಯ್ಯ ಕಾರ್ಯಕ್ರಮ ನಿರೂಪಿಸಿದರು. ಶ್ರೀ ಪಾರ್ಥಸಾರಥಿ ಕೊನೆಯಲ್ಲಿ ವಂದನೆ ಸಲ್ಲಿಸಿದರು. ಸ್ಪರ್ಧಿಗಳಿಗೆ ಭೋಜನ ವ್ಯವಸ್ಥೆಯನ್ನು ಮಾಡಲಾಗಿತ್ತು ಸುಮಾರು ೨೦ ಜನ ಸ್ಪರ್ಧೆಯಲ್ಲಿ ಭಾಗವಹಿಸಿದ್ದರು. ವಿಜೇತರಿಗೆ ಪ್ರೊ. ಡಿ. ಲಿಂಗಯ್ಯ ಅವರು ಬಹುಮಾನ ವಿತರಿಸಿದರು.

**೨೩-೧-೨೦೧೨ ಸೋಮವಾರ ಸಂಜೆ ೫-೩೦ಕ್ಕೆ 'ಸಿರಿಕಂಠ' ವೇದಿಕೆಯ ತಿಂಗಳ ಕಾರ್ಯಕ್ರಮ ಹಾಗೂ ಎನ್. ಅನಂತರಂಗಾಚಾರ್ ದತ್ತಿ ಕಾರ್ಯಕ್ರಮ ಆಯೋಜಿಸಲಾಗಿತ್ತು.**

ಸೂರಿಯ ಸಂಶೋಧಕ ಶ್ರೀ ತಿರುಮಲೆ ಶ್ರೀ ರಂಗಾಚಾರ್ 'ಕರ್ನಾಟಕದಲ್ಲಿ ರಾಮಾನುಜಪೂರ್ವ ಶ್ರೀವೈಷ್ಣವ ಪರಂಪರೆ' ಕುರಿತು ವಿದ್ವತ್‌ಪೂರ್ಣ ಉಪನ್ಯಾಸ ನೀಡಿದರು. ಪ್ರೊ. ಡಿ. ಲಿಂಗಯ್ಯ ಅಧ್ಯಕ್ಷತೆ ವಹಿಸಿದ್ದರು. ಡಾ. ನಾ. ಗೀತಾಚಾರ್ಯ ಸರ್ವರನ್ನೂ ಸ್ವಾಗತಿಸಿದರು. ಶ್ರೀ ಸುಂಕಂ. ಗೋವರ್ಧನ 'ಸಿರಿಕಂಟ'ದ ಚಟುವಟಿಕೆಗಳನ್ನು ವಿವರಿಸಿದರು. ಕೊನೆಯಲ್ಲಿ ಡಾ. ಶ್ಯಾಮಲಾರತ್ನಕುಮಾರಿ ವಂದನಾರ್ಪಣೆ ಮಾಡಿದರು.

**೧೧-೨-೨೦೧೨ ಕೆ. ಪಿ. ರಾವ್ ದತ್ತಿ ಕಾರ್ಯಕ್ರಮದ ಅಂಗವಾಗಿ 'ಆಸ್ತಿಹಕ್ಕು ಮತ್ತು ವೈವಾಹಿಕ ಸಮಸ್ಯೆಗಳ' ಕುರಿತು ಖ್ಯಾತ ನ್ಯಾಯವಾದಿ ಹಾಗು ಸಾಹಿತಿಗಳಾದ ಶ್ರೀಮತಿ ಹೇಮಲತಾ ಮಹಿಷಿಯವರು ಉಪನ್ಯಾಸ ನೀಡಿದರು.** ದತ್ತಿ ದಾನಿಗಳಾದ ಕೆ. ಪಿ. ರಾವ್ ಅವರ ಪುತ್ರಿ ಶ್ರೀಮತಿ ಪ್ರಭಾಮೂರ್ತಿ, ಅಡ್ವೋಕೇಟ್ ಅವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದು ಅವರ ತಂದೆಯವರು ಕಾನೂನು ಕ್ಷೇತ್ರದಲ್ಲಿ ನೀಡಿರುವ ಕೊಡುಗೆಗಳ ಬಗ್ಗೆ ಮಾಹಿತಿ ನೀಡಿದರು. ಪ್ರತಿಷ್ಠಾನದ ಅಧ್ಯಕ್ಷರಾದ ಪ್ರೊ. ಡಿ. ಲಿಂಗಯ್ಯ ಅಧ್ಯಕ್ಷತೆ ವಹಿಸಿದ್ದರು. ಪ್ರಾರಂಭದಲ್ಲಿ ಶ್ರೀ ಎಸ್. ವಿ ಶ್ರೀನಿವಾಸರಾವ್ ರವರು ಅತಿಥಿಗಳ ಪರಿಚಯ ಮಾಡಿಸಿ ಸರ್ವರನ್ನೂ ಸ್ವಾಗತಿಸಿದರು. ಕಾರ್ಯಕ್ರಮದ ಕೊನೆಯಲ್ಲಿ ಶ್ರೀ ಎಂ. ಎಸ್. ರಾಮಪ್ರಸಾದ್ ವಂದನಾರ್ಪಣೆ ಸಲ್ಲಿಸಿದರು.

**೨೪-೨-೨೦೧೨ 'ಕನ್ನಡ ಮಾತು ತಲೆಯೆತ್ತುವ ಬಗೆ ಜಾಗೃತಿ' ಬಿ.ಎಂ.ಶ್ರೀ ಅವರ ಈ ವಿಶೇಷ ಉಪನ್ಯಾಸ ಕುರಿತು ಶೇಷಾದ್ರಿಪುರಂ ಅಕಾಡೆಮಿ ಆಫ್ ಬಿಜಿನೆಸ್ ಸ್ಟಡೀಸ್ ಪದವಿ ಕಾಲೇಜು, ಕೆಂಗೇರಿ ಉಪನಗರ, ಬೆಂಗಳೂರು-೬೦. ಬಿ.ಎಂ.ಶ್ರೀ. ಪ್ರತಿಷ್ಠಾನದ ಸಹಯೋಗದಲ್ಲಿ ಈ ಕಾರ್ಯಕ್ರಮ ನೆರವೇರಿತು** ಡಾ. ನಾ. ಗೀತಾಚಾರ್ಯ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಕನ್ನಡ ಉಪನ್ಯಾಸಕ ಶ್ರೀ ಆರ್. ವಾದಿರಾಜ್ ಅತಿಥಿಗಳಾಗಿ ಆಗಮಿಸಿದ್ದರು. ಪ್ರೊ. ಜಯರಾಮ್, ಪ್ರಾಂಶುಪಾಲರು ಎಸ್. ಎ.ಬಿಎಸ್. ಅವರು ಅಧ್ಯಕ್ಷತೆ ವಹಿಸಿದ್ದರು. ಶ್ರೀಮತಿ ಆಶಾ ಜಿ. ಅವರು ಕಾರ್ಯಕ್ರಮ ನಿರೂಪಿಸಿದರು. ಶ್ರೀ ರವಿಚಂದ್ರ ಆರ್. ಅವರು ವಂದನಾರ್ಪಣೆ ಮಾಡಿದರು.

**೨೬-೨-೨೦೧೨ ಭಾನುವಾರ ಬೆಳಿಗ್ಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸಿರಿಕಂಟ ವೇದಿಕೆ, ದ. ರಾ. ಬೇಂದ್ರೆ ಕಾವ್ಯಕೂಟ, ಮತ್ತು ಓದು-ಬರಹ ಬಳಗ, ಬೆಂಗಳೂರು ಸಂಯುಕ್ತವಾಗಿ ಆಯೋಜಿಸಿದ್ದ 'ಬೇಂದ್ರೆಯವರ ಸಖೀಗೀತ (ಓದು-ವ್ಯಾಖ್ಯಾನ-ಚರ್ಚೆ) ಕಾರ್ಯಕ್ರಮ ಪ್ರತಿಷ್ಠಾನದ ಸಭಾಂಗಣದಲ್ಲಿ ನಡೆಯಿತು.** ಡಾ. ಜಿ. ಕೃಷ್ಣಪ್ಪ ಕಾರ್ಯಕ್ರಮ ನಡೆಸಿಕೊಟ್ಟರು. ಕಾರ್ಯಕ್ರಮದ ನಿರೂಪಣೆ ಡಾ. ಶ್ಯಾಮಲಾ ರತ್ನಕುಮಾರಿ ಮತ್ತು ಸುಂಕಂ. ಗೋವರ್ಧನ ಅವರುಗಳಿಂದ ನಡೆಯಿತು. ವೇಮಗಲ್ ಮೂರ್ತಿ, ಧೀರೇಂದ್ರ ಜಾಗೀರ್‌ದಾರ್ ಉಪಸ್ಥಿತರಿದ್ದರು.

**೩-೩-೨೦೧೨ ವೆಂಕಟರಂಗಪ್ಪ ಸ್ಮಾರಕ ದತ್ತಿ, ಜಿ. ಪಿ. ರಾಜರತ್ನಂ, ಚಂದ್ರಶೇಖರ ಶರ್ಮ ದತ್ತಿ ಕಾರ್ಯಕ್ರಮಗಳ ಅಂಗವಾಗಿ ಡಾ. ವಸಂತಕುಮಾರ್ ಪೆರ್ಲ, ಕಾರ್ಯನಿರ್ವಾಹಕರು.** ಆಕಾಶವಾಣಿ ಕೇಂದ್ರ, ಮಂಗಳೂರು; ಮುಖ್ಯ ಉಪನ್ಯಾಸಕರಾಗಿ ಆಗಮಿಸಿದ್ದು 'ಸಮಕಾಲಿನ



**೩-೩-೧೨ ವೆಂಕಟರಂಗಪ್ಪ, ಜಿ. ಪಿ. ರಾಜರತ್ನಂ, ಚಂದ್ರಶೇಖರ ಶರ್ಮ ದತ್ತಿ ಕಾರ್ಯಕ್ರಮಗಳು. ಉಪನ್ಯಾಸಕರು : ಡಾ. ವಸಂತಕುಮಾರ್ ಪೆರ್ಲ, ಅಧ್ಯಕ್ಷರು ಪ್ರೊ. ಡಿ. ಲಿಂಗಯ್ಯ, ಸಿರಿಸಂಗಿತ ವಿದುಷಿ ಶ್ರೀಮತಿ ಶ್ರೀ ವಿದ್ಯಾ ಮೋಹನ್ ಅವರಿಂದ**

ಕಾವ್ಯಗಳು ಎದುರಿಸುತ್ತಿರುವ ಸವಾಲುಗಳು' ಕುರಿತು ಮೌಲಿಕ ಭಾಷಣ ಮಾಡಿದರು. ಪ್ರತಿಷ್ಠಾನದ ಅಧ್ಯಕ್ಷರಾದ ಪ್ರೊ. ಡಿ. ಲಿಂಗಯ್ಯ ಅಧ್ಯಕ್ಷತೆ ವಹಿಸಿದ್ದರು. ಪ್ರಾರಂಭದಲ್ಲಿ ವಿದುಷಿ ಶ್ರೀಮತಿ ಶ್ರೀ ವಿದ್ಯಾ ಮೋಹನ್ ಅವರಿಂದ ಪ್ರಾರ್ಥನೆ ಹಾಗೂ ಸಿರಿ ಸಂಗೀತ ಕಾರ್ಯಕ್ರಮ ನಡೆಯಿತು. ಶ್ರೀ ಎಸ್. ವಿ. ಶ್ರೀನಿವಾಸರಾವ್ ಅತಿಥಿಗಳ ಪರಿಚಯ ಮಾಡಿಸಿ, ಸ್ವಾಗತಿಸಿದರು. ಶ್ರೀ ಎಂ. ಎಸ್. ರಾಮಪ್ರಸಾದ್ ವಂದನಾರ್ಪಣೆ ಮಾಡಿದರು.

**೧೨-೩-೨೦೧೨ ಸೋಮವಾರ ೫-೩೦. ಎಂ.ವಿ.ಸೀ. ಪುರಸ್ಕಾರ (೨೦೧೧) ಪ್ರದಾನ ಕಾರ್ಯಕ್ರಮ ಜರುಗಿತು.** ಡಾ. ಮಹೇಶ್ ಜೋಶಿ, ಉಪ ಮಹಾನಿರ್ದೇಶಕರು, ದೂರದರ್ಶನ ಕೇಂದ್ರ, ಬೆಂಗಳೂರು, ಅವರು ಪುರಸ್ಕಾರವನ್ನು ಖ್ಯಾತ ಸಂಶೋಧಕರು ಡಾ. ವೈ. ಸಿ. ಭಾನುಮತಿ, ಮೈಸೂರು ವಿಶ್ವವಿದ್ಯಾನಿಲಯ ಅವರಿಗೆ ಪ್ರದಾನ ಮಾಡಿದರು. ಮುಖ್ಯ

ಅತಿಥಿಗಳಾಗಿ ಆಗಮಿಸಿದ್ದ ಖ್ಯಾತ ವಿದ್ವಾಂಸ ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ ಅವರು ಎಂ.ವಿ.ಸೀ. ಅವರ ಬಗ್ಗೆ ಮತ್ತು ಅವರ ಸಾಹಿತ್ಯ ಕೊಡುಗೆಗಳ ಬಗ್ಗೆ ವಿದ್ವತ್‌ಪೂರ್ಣ ಉಪನ್ಯಾಸ ನೀಡಿದರು. ಪ್ರೊ. ಡಿ. ಲಿಂಗಯ್ಯ ಅಧ್ಯಕ್ಷತೆ ವಹಿಸಿದ್ದರು. ಸಂಗೀತ ವಿದೂಷಿ ಶ್ರೀಮತಿ ಶ್ರೀಮತಿಯವರು ಎಂ.ವಿ.ಸೀ. ಗೀತೆಗಳನ್ನು ಸುಶ್ರಾವ್ಯವಾಗಿ ಹಾಡಿದರು. ಕಾರ್ಯಕ್ರಮದ ಪ್ರಾರಂಭದಲ್ಲಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅತಿಥಿಗಳ ಪರಿಚಯ ಮಾಡಿಸಿ, ಸರ್ವರನ್ನು ಸ್ವಾಗತಿಸಿದರು.




**೧೨-೩-೨೦೧೨ ಎಂ.ವಿ.ಸೀ. ಪುರಸ್ಕಾರ (೨೦೧೧) ಪುರಸ್ಕಾರ ಸ್ವೀಕರಿಸಿದರು. ಡಾ. ವೈ. ಸಿ. ಭಾನುಮತಿ ಪುರಸ್ಕಾರ ಪ್ರದಾನ, ಡಾ. ಮಹೇಶ ಜೋಶಿ, ಮುಖ್ಯ ಅತಿಥಿ : ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರಿ, ಅಧ್ಯಕ್ಷರು : ಪ್ರೊ. ಡಿ. ಲಿಂಗಯ್ಯ**

ಡಾ. ನಾ. ಗೀತಾಚಾರ್ಯ ಕಾರ್ಯಕ್ರಮ ನಿರೂಪಿಸಿ, ಕೊನೆಯಲ್ಲಿ ವಂದನಾರ್ಪಣೆ ಸಲ್ಲಿಸಿದರು.

**೧೮-೩-೨೦೧೨ ರಂದು ಪುಸ್ತಕಗಳ ಲೋಕಾರ್ಪಣೆ ಕಾರ್ಯಕ್ರಮ.** ಸುಂದರ ಪ್ರಕಾಶನ, ಬೆಂಗಳೂರು-೧೯ ಇದೇ ಮಾರ್ಚ್ ೧೮-೩-೨೦೧೨ ರಂದು ಬೆಂಗಳೂರಿನ, ಬಿ.ಎಂ.ಶ್ರೀ. ಪ್ರತಿಷ್ಠಾನದ ಎಂ.ವಿ.ಸೀ. ಸಭಾಂಗಣದಲ್ಲಿ ಸುಂದರ ಪ್ರಕಾಶನದ ಶ್ರೀ ಗೌರಿ ಸುಂದರ್ ಅವರು ಪ್ರಕಟಿಸಿದ ೨ ಪುಸ್ತಕಗಳ ಲೋಕಾರ್ಪಣೆ ಕಾರ್ಯಕ್ರಮ ಪ್ರೊ. ಡಿ. ಲಿಂಗಯ್ಯ (ಬಿ.ಎಂ.ಶ್ರೀ. ಪ್ರತಿಷ್ಠಾನದ ಅಧ್ಯಕ್ಷರು) ಅವರ ಅಧ್ಯಕ್ಷತೆಯಲ್ಲಿ ನೆರವೇರಿತು. ಕಾರ್ಯಕ್ರಮದ ಮುಖ್ಯ ಅಥಿತಿಗಳಾಗಿ ಡಾ. ಶಿವಮೊಗ್ಗ ಸುಬ್ಬಣ್ಣ, ಶ್ರೀ ಡಿ. ವೀರಯ್ಯ (ವಿಧಾನ ಪರಿಷತ್ ಸದಸ್ಯರು) ಶ್ರೀ ಮಂ. ಅ. ವೆಂಕಟೇಶ್ ಅವರು ಭಾಗವಹಿಸಿದ್ದರು. ಶ್ರೀ ಎಂ. ಎಸ್. ಭಾಸ್ಕರ್ ಅವರ 'ನೂರು ಪದ್ಯಗಳು-ನೂರಾರು ಭಾವನೆಗಳು' ಮತ್ತು ಶ್ರೀ ವೆಂಕಟೇಶ್ ಅವರ 'ಭಿನ್ನವತ್ತಳೆ' ಬಿಡುಗಡೆಯಾದ ಪುಸ್ತಕಗಳು. ಕಾರ್ಯಕ್ರಮದ ಮೊದಲಿಗೆ ಶ್ರೀಮತಿ ನೇತ್ರ ಎಸ್. ನಾಥ ಅವರಿಂದ ಹಿಂದೂಸ್ಥಾನಿ ಶಾಸ್ತ್ರೀಯ ಸಂಗೀತ



**೧೮-೩-೨೦೧೨ ರಂದು ಪುಸ್ತಕಗಳ ಲೋಕಾರ್ಪಣೆ ಕಾರ್ಯಕ್ರಮ.**

ಏರ್ಪಡಿಸಲಾಗಿತ್ತು. ಶ್ರೀ ಆನಂದರಾಂ ಅವರು ಕಾರ್ಯಕ್ರಮದ ನಿರೂಪಣೆ, ಸ್ವಾಗತ, ವಂದನಾರ್ಪಣೆ ನಡೆಸಿಕೊಟ್ಟರು. ಶ್ರೀ ಗೌರಿಸುಂದರ್ ಅವರು ಅಥಿತಿಗಳನ್ನು ಅಭಿನಂದಿಸಿ ಸುಂದರ ಪ್ರಕಾಶನ ನಡೆದುಬಂದ ದಾರಿ ವಿವರ ಮತ್ತು ಮುಂದಿನ ಯೋಜನೆಗಳಿಗೆ ಸಾಹಿತ್ಯ ಅಭಿಮಾನಿಗಳ ಉತ್ತೇಜನ ಬಯಸಿದರು.

**ದಿನಾಂಕ ೧೮-೩-೨೦೧೨ ರಂದು ೨ನೇ ರಾಷ್ಟ್ರೀಯ ಕನ್ನಡ ಹಸ್ತಪ್ರತಿ ಸಮಾವೇಶ, ಶಿವಮೊಗ್ಗ ಜಿಲ್ಲೆಯ ಶ್ರೀರಾಮಚಂದ್ರಾಪುರ ಮಠದಲ್ಲಿ ಜರುಗಿತು.** ಬೆಳಿಗ್ಗೆ ೯-೩೦ಕ್ಕೆ ಹಿರಿಯ ವಿದ್ವಾಂಸರಾದ ಪ್ರೊ. ಎನ್. ಬಸವಾರಾಧ್ಯ ಅವರು ಸಮಾವೇಶವನ್ನು ಉದ್ಘಾಟಿಸಿದರು.

**ಹಸ್ತಪ್ರತಿ ಅಧ್ಯಯನ ಸಮಾವೇಶ ಸಂಪುಟ-೧** ಅನ್ನು ಹಿರಿಯ ಪತ್ರಕರ್ತ 'ಕಲಾ ದರ್ಶನ' ಪತ್ರಿಕೆಯ ಸಂಪಾದಕ ಶ್ರೀ ಟಿ. ವಿ. ಹೊಸಮನೆ ಅವರು ಲೋಕಾರ್ಪಣೆ ಗೊಳಿಸಿದರು. ಹಿರಿಯ ಹಸ್ತಪ್ರತಿ ವಿದ್ವಾಂಸ ಡಾ. ಕೆಳದಿ ಗುಂಡಾಜೋಯಿಸ್ ಅವರು ಸಮಾವೇಶದ ಸರ್ವಾಧ್ಯಕ್ಷರಾಗಿದ್ದರು. ಹಸ್ತಪ್ರತಿ ಮಿಷನ್ ಸಂಚಾಲಕರಾದ ಡಾ. ಕೆಳದಿ ವೆಂಕಟೇಶ ಜೋಯಿಸ್ ಉಪಸ್ಥಿತರಿದ್ದರು. ಶ್ರೀರಾಮಚಂದ್ರಾಪುರ ಮಠದ ಕಾರ್ಯದರ್ಶಿ ಶ್ರೀ ವೆಂಕಟೇಶ ಪಡ್ಡಿನಬೈಲು, ಅಧ್ಯಕ್ಷತೆ ವಹಿಸಿದ್ದರು. ಶ್ರೀರಾಮಚಂದ್ರಾಪುರ ಮಠದ ಶ್ರೀ ಆಚಾರ್ಯ ಭಟ್ ಸ್ವಾಗತಿಸಿದರು. ಪ್ರಾರಂಭದಲ್ಲಿ ಡಾ. ನಾ. ಗೀತಾಚಾರ್ಯ



ಪ್ರಸ್ತಾವಿಕ ಭಾಷಣ ಮಾಡಿ ಹಸ್ತಪ್ರತಿ ಸಮಾವೇಶ, ಹಸ್ತಪ್ರತಿಗಳ ಸಂರಕ್ಷಣೆ, ಸಂಪಾದನೆ ಬಗ್ಗೆ ವಿವರಣೆ ನೀಡಿದರು.

ಮೊದಲ ಗೋಷ್ಠಿ ಸುಮಾರು ೧೨ ಗಂಟೆಗೆ ಪ್ರಾರಂಭವಾಯಿತು. ಈ ಗೋಷ್ಠಿಯ ಅಧ್ಯಕ್ಷತೆಯನ್ನು ಹಿರಿಯ ಸಾಹಿತಿ ಪ್ರತಿಷ್ಠಾನದ ವ್ಯವಸ್ಥಾಪಕ ಕಾರ್ಯದರ್ಶಿ ಶ್ರೀ ಎಸ್. ವಿ. ಶ್ರೀನಿವಾಸವಾವ್ ವಹಿಸಿದ್ದರು. ಈ ಗೋಷ್ಠಿಯಲ್ಲಿ ಶ್ರೀ ಎಸ್. ಕಾರ್ತಿಕ್, ಡಾ. ನಾ. ಗೀತಾಚಾರ್ಯ, ಡಿ. ಕೆ. ಮಂಜುನಾಥ್, ಡಾ. ಅನಂತಪದ್ಮನಾಭ, ಡಾ. ಬಿ. ಆರ್. ಭಾರತಿ ತಮ್ಮ ಲೇಖನಗಳನ್ನು ಪ್ರಸ್ತುತಪಡಿಸಿದರು.

ಮಧ್ಯಾಹ್ನದ ಗೋಷ್ಠಿಯ ಅಧ್ಯಕ್ಷತೆಯನ್ನು ಡಾ. ಪಿ. ವಿ. ಕೃಷ್ಣಮೂರ್ತಿ ವಹಿಸಿದ್ದರು. ಶ್ರೀಮತಿ ಭಾರತಿ ಕಾರ್ಯಕ್ರಮ ನಿರೂಪಿಸಿದರು. ಗೋಷ್ಠಿಯಲ್ಲಿ ಶ್ರೀಮತಿ ಗಂಗಾಂಬಿಕೆ, ಗುರುಪ್ರಸಾದ್, ಬಿ. ಎಸ್., ಡಾ. ಶ್ಯಾಮಲಾರತ್ನಕುಮಾರಿ, ವಿ. ಸಂಧ್ಯಾ, ಉಷಾರಾಣಿ, ನಳಿನ. ಕೆ. ಭಾಗವಹಿಸಿ ತಮ್ಮ ಪ್ರಬಂಧಗಳನ್ನು ಮಂಡಿಸಿದರು.

ಅನಂತರ ನಡೆದ ಸಮಾರೋಪ ಸಮಾರಂಭದ ಸರ್ವಾಧ್ಯಕ್ಷತೆಯನ್ನು ಡಾ. ಕೆಳದಿ ಗುಂಡಾ ಜೋಯಿಸ್ ವಹಿಸಿದ್ದರು. ಶ್ರೀ ಎಸ್. ವಿ. ಶ್ರೀನಿವಾಸರಾವ್ ಸ್ವಾಗತಿಸಿದರು. ಕಾರ್ಯಕ್ರಮವನ್ನು ಡಾ. ಕೆಳದಿ ವೆಂಕಟೇಶ್ ಜೋಯಿಸ್ ನಿರೂಪಿಸಿದರು.




ಖ್ಯಾತ ಲೇಖಕಿ ಡಾ. ವಿಜಯಾ ಸುಬ್ಬರಾಜ್‌ರವರು ಸಮಾರೋಪ ಭಾಷಣ ಮಾಡಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಕೆಳದಿಯ ಮಠದ ಆಚಾರ್ಯ ಭಟ್ ವಹಿಸಿದ್ದರು. ಸಿರಿಕಂಟ-ಸಂಚಾಲಕರಾದ ಶ್ರೀ ಸುಂಕಂ ಗೋವರ್ಧನ್ ಎಲ್ಲರಿಗೂ ವಂದನೆ ಸಲ್ಲಿಸಿದರು.

ಕಾರ್ಯಕ್ರಮದಲ್ಲಿ ಬೆಳಿಗ್ಗೆಯಿಂದ ಸಂಜೆಯವರೆಗೆ ಪ್ರಾಚೀನ ಓಲೆಗರಿ, ಕಾಗದ ಹಸ್ತಪ್ರತಿಗಳ ಪ್ರದರ್ಶನ ಏರ್ಪಡಿಸಲಾಗಿತ್ತು ಶ್ರೀರಾಮಚಂದ್ರಾಪುರದ ಮಠದ ಭಕ್ತರು, ವಿದ್ಯಾರ್ಥಿಗಳು ಅಧಿಕ ಸಂಖ್ಯೆಯಲ್ಲಿ ಈ ಪ್ರದರ್ಶನ ವೀಕ್ಷಿಸಿದರು.

## ಪ್ರತಿಷ್ಠಾನದ ಸದಸ್ಯರುಗಳಿಗಾಗಿ 'ಕವಿಗೋಷ್ಠಿ'

ಜುಲೈ ~~ಜೂನ್~~ ತಿಂಗಳಲ್ಲಿ ಪ್ರತಿಷ್ಠಾನದ ಸದಸ್ಯರುಗಳಿಗಾಗಿಯೇ 'ಕವಿಗೋಷ್ಠಿ'ಯನ್ನು ಏರ್ಪಡಿಸಲಾಗಿದೆ. ಸದಸ್ಯರುಗಳು ತಾವೇ ರಚಿಸಿರುವ ಕವನ/ಅಥವಾ ಯಾವುದಾದರೂ ಒಂದು ಕವನವನ್ನು ವಾಚಿಸಬಹುದಾಗಿದೆ. ಭಾಗವಹಿಸಿದ ಎಲ್ಲರಿಗೂ ಪ್ರತಿಷ್ಠಾನದ ವತಿಯಿಂದ ನೆನಪಿನ ಕಾಣಿಕೆಯನ್ನು ನೀಡಲಾಗುವುದು.

ಪ್ರತಿಷ್ಠಾನದ ಸದಸ್ಯರಲ್ಲಿನ ಪ್ರತಿಭೆಯನ್ನು ಹೊರತರಬಯಸುವ ಈ ಹೊಸ ಪ್ರಯತ್ನಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಕನ್ನಡಾಭಿಮಾನಿಗಳು ಭಾಗವಹಿಸುವರೆಂದು ನಿರೀಕ್ಷಿಸಲಾಗಿದೆ.

**ವಿಶೇಷ ಪ್ರಕಟಣೆ** : ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌ॥ ಕಾರ್ಯದರ್ಶಿಗಳಾಗಿದ್ದ ಡಾ॥ ನಾ. ಗೀತಾಚಾರ್ಯ ಅವರು ತಾ॥ ೧೩-೩-೨೦೧೨ ರಂದು ಸಲ್ಲಿಸಿರುವ ರಾಜೀನಾಮೆಯನ್ನು ಕಾರ್ಯಕಾರಿ ಸಮಿತಿಯು ತಾ॥ ೨೨-೩-೨೦೧೨ ರಂದು ಅಂಗೀಕರಿಸಿ, ಅವರ ಸ್ಥಾನದಲ್ಲಿ ವ್ಯ॥ ಕಾರ್ಯದರ್ಶಿಯಾಗಿದ್ದ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರನ್ನು ಗೌ॥ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸಲು ನೇಮಕ ಮಾಡಿದೆ.

## ಪುಸ್ತಕ ಪರಿಚಯ

**೧. ಹಸ್ತಪ್ರತಿ ಅಧ್ಯಯನ-ಸಮಾವೇಶ ಸಂಪುಟ-೧**
ಪ್ರಕಟಣೆ : ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ.
ಸಂಪಾದಕರು : ಶ್ರೀ ಸುಂಕಂ ಗೋವರ್ಧನ ಮತ್ತು
ಡಾ॥ ಬೆಂ.ಶಾ. ಶ್ಯಾಮಲಾರತ್ನಕುಮಾರಿ
ಪ್ರಕಟಣೆ: ೨೦೧೨. ಪುಟಗಳು: ೨೨೪.ಬೆಲೆ: ರೂ.೧೦೦/-.

ಪ್ರಥಮ ರಾಷ್ಟ್ರೀಯ ಹಸ್ತಪ್ರತಿ ಸಮಾವೇಶ-೨೦೧೧ ರಲ್ಲಿ ಧರ್ಮಸ್ಥಳದ ಬಳಿಯಲ್ಲಿನ ಉಜಿರೆಯಲ್ಲಿ ಧ'ರ್ಮಾಧಿಕಾರಿ ಡಾ॥ ವೀರೇಂದ್ರ ಹೆಗ್ಗಡೆಯವರ ಆಶ್ರಯದಲ್ಲಿ ನಡೆದಿತ್ತು. ಖ್ಯಾತ ಸಂಶೋಧಕ ಡಾ॥ ಬಿ. ಎಸ್. ಸಣ್ಣಯ್ಯ ಈ ಸಮ್ಮೇಳನದ ಸರ್ವಾಧ್ಯಕ್ಷ ರಾಗಿದ್ದರು.ಈ ಸಮಾವೇಶದಲ್ಲಿ ಖ್ಯಾತ ಸಂಶೋಧಕರುಗಳು, ಸಂಶೋಧನಾ ವಿದ್ಯಾರ್ಥಿಗಳು. ಒಟ್ಟು ೨೦ ಜನ ಭಾಗವಹಿಸಿದ್ದರು. ಅವರುಗಳು ಸಮಾವೇಶದಲ್ಲಿ ಮಂಡಿಸಿದ್ದ ಪ್ರಬಂಧಗಳ ಸಂಕಲನವೇ ಈ ಸಂಪುಟ-೧. ಇದರಲ್ಲಿನ ಎಲ್ಲಾ ಪ್ರಬಂಧಗಳು ಮಹತ್ವ ಪೂರ್ಣದವುಗಳಾಗಿವೆ. ಸಂಶೋಧನಾ ವಿದ್ಯಾರ್ಥಿಗಳಿಗೆ ಬಹು ಉಪಯುಕ್ತ ಮಾಹಿತಿಯನ್ನು ಒದಗಿಸುತ್ತದೆ. ಕನ್ನಡ ಹಸ್ತಪ್ರತಿ ಗ್ರಂಥಗಳ ಕೇಂದ್ರವೊಂದನ್ನು ಸ್ಥಾಪಿಸುವ ಅಗತ್ಯವನ್ನು ಸರ್ವಾಧ್ಯಕ್ಷರು ತಮ್ಮ ಭಾಷಣದಲ್ಲಿ ಒತ್ತಿ ಹೇಳಿರುತ್ತಾರೆ





**೨. ಶಿವಪುರ ಧ್ವಜಸತ್ಯಾಗ್ರಹ (ಸ್ವಾತಂತ್ರ್ಯ ಸಂಗ್ರಾಮದ ಚರಿತ್ರೆ).**
ಲೇಖಕರು : ಪ್ರೊ. ಡಿ. ಲಿಂಗಯ್ಯ.
ಪ್ರಕಾಶಕರು : ಗೋಧೂಳಿ ಪ್ರಕಾಶನ. ೩೫, ೫ನೇ 'ಬಿ' ಅಡ್ಡರಸ್ತೆ, ಸಿಂಡಿಕೇಟ್ ಬ್ಯಾಂಕ್ ಬಡಾವಣೆ, ತುಂಗಾನಗರ, ಬೆಂಗಳೂರು-೯೧.
ಪರಿಷ್ಕೃತ ೩ನೇ ಮುದ್ರಣ ಬೆಲೆ : ರೂ. ೩೦೦/-ಪುಟಗಳು೧೮+೩೭೮+೫೪(ಫೋಟೊಗಳು) =೪೦೦.

'ಶಿವಪುರ ಧ್ವಜ ಸತ್ಯಾಗ್ರಹ' ಪ್ರೊ. ಡಿ. ಲಿಂಗಯ್ಯ ಅವರು ಬಹಳ ಶ್ರಮವಹಿಸಿ ಮಾಹಿತಿ ಸಂಗ್ರಹಿಸಿ, ಬರೆದಿರುವ ಮೌಲಿಕ ಗ್ರಂಥ. ಕರ್ನಾಟಕದಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮದ ಬಗ್ಗೆ ಖಚಿತ ಮಾಹಿತಿ ನೀಡುವ ಅಪೂರ್ವ ಆಕರ ಗ್ರಂಥ. ಇದರಲ್ಲಿ ಬಹು ಹಿರಿಯ ಸಾಧಕರ ಭಾವಚಿತ್ರಗಳಿವೆ. ಸಂಗ್ರಾಮದ ವಿಶಿಷ್ಟ ಚಿತ್ರಗಳಿವೆ. ಚಾರಿತ್ರಿಕ ಘಟನೆಗಳ ವಿವರಗಳಿವೆ. ನೂರಾರು ಸ್ವಾತಂತ್ರ್ಯ ಹೋರಾಟಗಾರರ ವಿವರಗಳಲ್ಲದೆ ಅವರ ಅನಿಸಿಕೆಗಳೂ ದಾಖಲಾಗಿರುವುದು ಈ ಕೃತಿಯ ವೈಶಿಷ್ಟವನ್ನು ಹೆಚ್ಚಿಸಿದೆ. ಈ ಕೃತಿ ಈಗಾಗಲೇ ೩ ಬಾರಿ ಮರು ಮುದ್ರಣಗೊಂಡಿರುವುದು ಇದರ ಜನಪ್ರಿಯತೆಯನ್ನು ತಿಳಿಸುತ್ತದೆ. ಈ ಪ್ರಸ್ತುತ ಪರಿಷ್ಕೃತ ಕೃತಿಯಲ್ಲಿ ಹೆಚ್ಚಿನ ಮಾಹಿತಿಯನ್ನು ನೀಡಲಾಗಿದೆ. ಇದೊಂದು ಅಪೂರ್ವ ಮಾಹಿತಿ ಕೋಶವಾಗಿದೆ. ಎಲ್ಲಾ ಗ್ರಂಥಾಲಯ ಹಾಗೂ ಶಾಲಾ-ಕಾಲೇಜುಗಳ ಗ್ರಂಥಾಲಯದಲ್ಲಿ ಇರಲೇಬೇಕಾದ ಕೃತಿಯಾಗಿದೆ. ಇಂತಹ ಅಪೂರ್ವ ಕೃತಿಯನ್ನು ಸಂಪಾದಿಸಿರುವ ಪ್ರೊ. ಡಿ. ಲಿಂಗಯ್ಯ ಅಭಿನಂದನಾರ್ಹರು.

## ಅಭಿನಂದನೆಗಳು

೧. ೨೭-೨-೨೦೧೨ ಕನ್ನಡ ಮತ್ತು ಸಂಸ್ಕೃತಿ ಆಯುಕ್ತರಾಗಿರುವ **ಡಾ. ಮನು ಬಳಿಗಾರ್** ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಆಡಳಿತಾಧಿಕಾರಿಯಾಗಿ ಅಧಿಕಾರ ವಹಿಸಿಕೊಂಡಿದ್ದಾರೆ. ಕ.ಸಾ.ಪ. ಅಧ್ಯಕ್ಷರಾಗಿದ್ದ ಡಾ. ನಲ್ಲೂರು ಪ್ರಸಾದ್ ಅವರು ತಮ್ಮ ಅಧಿಕಾರಾವಧಿ ಮುಗಿದುದರಿಂದ, ತಮ್ಮ ಅಧಿಕಾರವನ್ನು ಡಾ. ಮನು ಬಳಿಗಾರ್ ಅವರಿಗೆ ವರ್ಗಾಯಿಸಿದರು.

೨. ೧೯-೨-೧೨ ಖ್ಯಾತ ಸಾಹಿತಿ ಹಾಗೂ ನ್ಯಾಯವಾದಿಯಾದ ಶ್ರೀಮತಿ ಹೇಮಲತಾ ಮಹಿಷಿ ಅವರಿಗೆ ಈ ವರ್ಷದ **ಎಚ್. ಎಸ್. ಪಾರ್ವತಿ ದತ್ತಿನಿಧಿ ಪ್ರಶಸ್ತಿ** ಕನ್ನಡ ಲೇಖಕಿಯರ ಸಂಘದ ಮೂಲಕ ನೀಡಲಾಗಿದೆ.

೩. ೨೮-೧-೧೨ ಡಾ. ನಿರುಪಮಾ ಅವರಿಗೆ ಚಿತ್ರನಟಿ ಬಿ. ಸರೋಜಾದೇವಿ ಅವರು ಅವರ ಪುತ್ರಿ ದಿವಂಗತ ಬಿ. ಭುವನೇಶ್ವರಿ ಅವರ ಸ್ಮರಣಾರ್ಥ ನೀಡುವ ಸರೋಜಾದೇವಿ ಸಾಹಿತ್ಯ ಪ್ರಶಸ್ತಿ ಲಭಿಸಿದೆ. ಸಮಾರಂಭ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಡೆಯಿತು.

೪. ೨೯-೩-೧೨ (ಸರ್ಕಾರಿ ಪ್ರಕಟಣೆ) ಶ್ರೀ ಜಿ. ಎನ್. ರಂಗನಾಥರಾವ್, ಪ್ರಜಾವಾಣಿಯ ನಿವೃತ್ತ ಕಾರ್ಯ ನಿರ್ವಾಹಕ ಸಂಪಾದಕರು, ೨೦೧೦ನೇ ವರ್ಷದ ಟಿ. ಎಸ್. ಆರ್. ಸ್ಮಾರಕ ಪತ್ರಿಕೋದ್ಯಮ ಪ್ರಶಸ್ತಿಗೆ, ಬೀದರ್‌ನ ಶ್ರೀ ಶಿವಶರಣಪ್ಪ ವಾಲಿ ಅವರು ೨೦೧೦ನೇ ಸಾಲಿನ ಮೊಹರೆ ಹಣಮಂತರಾಯ ಪ್ರಶಸ್ತಿಗೆ ಆಯ್ಕೆಗೊಂಡಿದ್ದಾರೆ.



ಅಚ್ಚಾದ ಪುಸ್ತಕ

ತೆರೆದ-ಅಂಚೆ

ಶ್ರೀಮತಿ/ಶ್ರೀ..........................................

...........................................................

...........................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು - ೧೯
ದೂರವಾಣಿ : ೨೬೬೧೫೮೭೭

ಮುದ್ರಕರು : 'ಚಂದನ ಪ್ರಿಂಟರ್ಸ್' ನಂ. ೩೧೨, ೭ನೇ ಮೇನ್, ನಾಗೇಂದ್ರ ಬ್ಲಾಕ್, ಬನಶಂಕರಿ ೧ನೇ ಹಂತ, ಬೆಂಗಳೂರು-೫೦. (೭೫೦ ಪ್ರತಿಗಳ